ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1862 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |
| ಉತ್ತರಿಸುವ ದಿನಾಂಕ | : | 24.03.2020. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಡಿಕೆ ಮಂಡಳಿ ರಚಿಸಲು ಕಳೆದ ಬಾರಿ ಸದನದಲ್ಲಿ ಭರವಸೆ ನೀಡಿದ್ದು, ಈ ಬಗ್ಗೆ ಕೈಗೊಂಡಿರುವ ಕ್ರಮವೇನು: (ವಿವರ ನೀಡುವುದು ) | ರಾಷ್ಟ್ರ ಮಟ್ಟದ ಅಡಿಕೆ ಮಂಡಳಿ ಸ್ಥಾಪಿಸಲು ಪತ್ರ ಸಂ: CM/551/GoI/2019, ದಿ: 12.12.2019 ರನ್ವಯ ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸಲಾಗಿದೆ. |
| ಆ) | ರಾಜ್ಯದಲ್ಲಿ ಅಡಿಕೆ ಬೆಳೆಗಾರರಿಗೆ ಪ್ರೋತ್ಸಾಹಿಸಲು ಮತ್ತು ಸಂಕಟದಿಂದ ಪಾರು ಮಾಡಲು ಸರ್ಕಾರದ ಮುಂದಿರುವ ಯೋಜನೆಗಳಾವುವು: (ವಿವರ ನೀಡುವುದು ) | ಅಡಿಕೆ ಬೆಳೆಗಾರರಿಗೆ ಪ್ರೋತ್ಸಾಹಿಸಲು ಸರ್ಕಾರದ ವತಿಯಿಂದ ಈ ಕೆಳಕಂಡ ಸವಲತ್ತುಗಳನ್ನು ಒದಗಿಸಲಾಗುತ್ತಿದೆ.<br>➢ ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆಯಡಿ ಅಡಿಕೆ ತೋಟಗಳಿಗೆ ಸೂಕ್ಷ್ಮ ನೀರಾವರಿ ಅಳವಡಿಕೆಗೆ ಶೇ.90ರಷ್ಟು 2 ಹೆಕ್ಟೇರ್ ವರೆಗೆ ಹಾಗೂ ಶೇ.45ರಷ್ಟು 2.10 ರಿಂದ 5 ಹೆಕ್ಟೇರ್ ವರೆಗೆ ಸಾಂಪ್ರದಾಯಿಕವಾಗಿ ಅಡಿಕೆ ಬೆಳೆಯುವ ಜಿಲ್ಲೆಗಳಾದ ಮಲೆನಾಡು ಹಾಗೂ ಕರಾವಳಿ ಜಿಲ್ಲೆಗಳಲ್ಲಿ ಸಹಾಯಧನ ಒದಗಿಸಲಾಗುತ್ತಿದೆ.<br>➢ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಮಗ್ರ ಕೀಡೆ ನಿರ್ವಹಣ ಕಾರ್ಯಕ್ರಮದಡಿ ಸಸ್ಯ ಸಂರಕ್ಷಣೆಗಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90ರಷ್ಟು ಹಾಗೂ ಇತರೆ ವರ್ಗದ ರೈತರಿಗೆ ಶೇ.30ರಷ್ಟು ಸಹಾಯಧನ ಒದಗಿಸಲಾಗುತ್ತಿದೆ.<br>➢ ತೋಟಗಾರಿಕೆಯಲ್ಲಿ ಯಾಂತ್ರೀಕರಣ ಯೋಜನೆಯಡಿ ಅಡಿಕೆ ಬೆಳೆಯಲ್ಲಿ ಯಾಂತ್ರೀಕರಣಕ್ಕೆ ಸಣ್ಣ, ಮಧ್ಯಮ, ಮಹಿಳಾ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಶೇ.50ರಷ್ಟು ಹಾಗೂ ಇತರೆ ವರ್ಗದ ಫಲಾನುಭವಿಗಳಿಗೆ ಶೇ.40ರಷ್ಟು ಸಹಾಯಧನ ಒದಗಿಸಲಾಗುತ್ತಿದೆ.<br>➢ MGNREGA ಯೋಜನೆಯಡಿ ಅಡಿಕೆ ಬೆಳೆಯ ಪ್ರದೇಶ ವಿಸ್ತರಣೆ ಕಾರ್ಯಕ್ರಮದಡಿ, ಅಡಿಕೆ ಬೆಳೆ ಪ್ರದೇಶ ವಿಸ್ತರಣೆಗೆ ರೂ.2.00 ಲಕ್ಷಗಳು ಪ್ರತಿ ಹೆಕ್ಟೇರ್ ಗೆ ಘಟಕ ವೆಚ್ಚವನ್ನು ಸಾಂಪ್ರದಾಯಿಕವಾಗಿ ಅಡಿಕೆ ಬೆಳೆಯುವ ಜಿಲ್ಲೆಗಳಾದ ಮಲೆನಾಡು ಹಾಗೂ ಕರಾವಳಿ ಜಿಲ್ಲೆಗಳಿಗೆ ಒದಗಿಸಲಾಗುತ್ತಿದೆ.<br>➢ ಮರುವಿನ್ಯಾಸಗೊಳಿಸಲಾದ ಹವಾಮಾನ ಆಧಾರಿತ ಬೆಳೆ ವಿಮಾ ಯೋಜನೆಯಡಿಯಲ್ಲಿ, ಅಡಿಕೆಗೆ ರೂ.1.28 ಲಕ್ಷ ಪ್ರತಿ ಹೆಕ್ಟೇರ್ ರಂತೆ ವಿಮಾ ಮೊತ್ತ ನಿಗಧಿಪಡಿಸಲಾಗಿದ್ದು, ರೈತರು ಶೇ.5 (ರೂ.6400) ರಂತೆ |

| | | |
|---|---|---|
| | | ಪ್ರೀಮಿಯಂ ಮೊತ್ತವನ್ನು ಪಾವತಿಸಿ ವಿಮಾ ಮೊತ್ತಕ್ಕೆ ಅರ್ಹರಾಗಿರುತ್ತಾರೆ. ಬೆಳೆ ನಷ್ಟ ಸಂದರ್ಭದಲ್ಲಿ, ಆಗಿರುವ ನಷ್ಟಕ್ಕೆ ಬರುವ ಪರಿಹಾರ ಮೊತ್ತವನ್ನು ಸಂಬಂಧಿಸಿದ ವಿಮಾ ಕಂಪನಿಗಳು ಒದಗಿಸುತ್ತವೆ.<br>➤ ರಾಜ್ಯವಲಯದ ತೋಟಗಾರಿಕೆ ಬೆಳೆಗಳ ರೋಗ ಮತ್ತು ಕೀಟಗಳ ಸಮಗ್ರ ನಿಯಂತ್ರಣ ಯೋಜನೆಯಡಿಯಲ್ಲಿ ಸಸ್ಯ ಸಂರಕ್ಷಣೆಗಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90ರಷ್ಟು ಹಾಗೂ ಇತರೆ ವರ್ಗದ ಫಲಾನುಭವಿಗಳಿಗೆ ಶೇ.75ರಷ್ಟು ಸಹಾಯಧನ ಒದಗಿಸಲಾಗುತ್ತಿದೆ.<br>➤ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಅಡಿಕೆ ಆರೋಗ್ಯಕ್ಕೆ ಹಾನಿಕಾರಕ ಎಂಬ ವಿಷಯದ ಪ್ರಕರಣವಿರುವ ಹಿನ್ನಲೆಯಲ್ಲಿ ಅಡಿಕೆ ಬೆಳೆಗಾರರ ಹಿತದೃಷ್ಟಿಯಿಂದ ರಾಜ್ಯ ಸರ್ಕಾರದಿಂದ ಅಡಿಕೆ ಕಾರ್ಯಪಡೆಯನ್ನು ರಚನೆ ಮಾಡಲಾಗಿದೆ. |
| ಇ) | ಅಡಿಕೆ ಕ್ಯಾನ್ಸರ್ ಕಾರಕ ಎಂದು ಕೇಂದ್ರ ಸರ್ಕಾರ ಸುಪ್ರೀಂಕೋರ್ಟ್‌ನಲ್ಲಿ ಸಲ್ಲಿಸಿದ ಅಫಿಡವಿಟ್ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು: ಪ್ರಸ್ತುತ ಯಾವ ಹಂತದಲ್ಲಿದೆ: | ಅಡಿಕೆ ಕ್ಯಾನ್ಸರ್ ಕಾರಕಕ್ಕೆ ಕಾರಣ ಎಂದು ಮಾನ್ಯ ಸುಪ್ರೀಂಕೋರ್ಟ್ ಮುಂದೆ ಇರುವ ತಕರಾರು Transfer Case (Civil) No: 1/2010 ಈ ವ್ಯಾಜ್ಯಕ್ಕೆ ಸಂಬಂಧಿಸಿದ್ದು, ಮಾನ್ಯ ಸುಪ್ರೀಂಕೋರ್ಟ್‌ನಲ್ಲಿ ವಿಚಾರಣೆಯ ಹಂತದಲ್ಲಿದೆ.<br>ಅಡಿಕೆ ಬೆಳೆಗಾರರ ಹಿತದೃಷ್ಟಿಯಿಂದ ಅಡಿಕೆ ಕಾರ್ಯಪಡೆಯು ರಚನೆಯಾಗಿದೆ. ಕಾರ್ಯಪಡೆಯ ವತಿಯಿಂದ ಅಡಿಕೆಯು ಆರೋಗ್ಯಕ್ಕೆ ಹಾನಿಕಾರಕವಲ್ಲವೆಂಬ ವೈಜ್ಞಾನಿಕ ವರದಿಗಳನ್ನು ಪಡೆದು ನ್ಯಾಯಾಲಯದ ಮುಂದೆ ಮಂಡಿಸಲು ದಾಖಲೆಗಳನ್ನು ಸಿದ್ಧಪಡಿಸುವ ಸಲುವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ರಾಜ್ಯದಲ್ಲಿ ಉತ್ಪಾದಿಸುವ ಅಡಿಕೆಗೆ ಉತ್ತಮ ಧಾರಣೆ ಒದಗಿಸಲು ಸರ್ಕಾರ ಕೈಗೊಂಡಿರುವ ಯೋಜನೆಗಳಾವುವು? (ವಿವರ ನೀಡುವುದು ) | ರಾಜ್ಯದಲ್ಲಿ ಉತ್ಪಾದಿಸುವ ಅಡಿಕೆಗೆ ಉತ್ತಮ ಧಾರಣೆ ಒದಗಿಸಲು ಬೆಲೆ ಕುಸಿತವಾದ ಸಂದರ್ಭಗಳಲ್ಲಿ ಕೇಂದ್ರ ಸರ್ಕಾರಕ್ಕೆ ಮಾರುಕಟ್ಟೆ ಮಧ್ಯ ಪ್ರವೇಶ ಯೋಜನೆಯಡಿ (MIS)ಬೆಂಬಲ ಬೆಲೆ ದೊರಕಿಸಲು ಪ್ರಸ್ತಾವನೆ ಸಲ್ಲಿಸಿ ಮಾರುಕಟ್ಟೆ ಮಧ್ಯ ಪ್ರವೇಶ ಬೆಲೆಯನ್ನು ನಿಗಧಿಪಡಿಸಿ ಅಡಿಕೆಯನ್ನು ಖರೀದಿಸಿ ಉತ್ತಮ ಧಾರಣೆ ದೊರಕಿಸಲು ಕ್ರಮ ಕೈಗೊಳ್ಳಲಾಗುವುದು. |

**HORTI 188 HGM 2020**

(ನಾರಾಯಣ ಗೌಡ)

**ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**